# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ — ೧೯

ಸಂಪುಟ ೧ ಸಂಚಿಕೆ ೧೧ ಕೊಪ್ಪ ೩೧-೧೦-೮೨ ಭಾನುವಾರ ಬೆಲೆ ೪೦ ಪೈಸೆ

ನಮ್ಮ ಪತ್ರಿಕೆಯ ಕಚೇರಿ

ನಮ್ಮ ಪತ್ರಿಕೆಯ ಕಚೇರಿ ಹಾಗೂ ಅಚ್ಚುಕೂಟವನ್ನು ತಿಲಕ್ ರಸ್ತೆ (ಕಾಫಿ ಬೋರ್ಡ್ ಕಚೇರಿ ಇರುವ ರಸ್ತೆ) ಯ ೨೨ (೩) ನಂಬರಿನ ಮನೆಯಲ್ಲಿ ತೆರೆದಿದ್ದೇವೆ. (ನಾರಿಮನ್ಸ್ ಟೆಕ್ಸ್‌ಟೈಲ್ಸ್ ಹಿಂಭಾಗ.) **ಸಂಪಾದಕರನ್ನು ಭೇಟಿ ಮಾಡುವ ಸಮಯ: ಬೆಳಿಗ್ಗೆ ೧೧.೩೦ ರಿಂದ ಸಂಜೆ ೪-೦೦ ಗಂಟೆವರೆಗೆ ಮಾತ್ರ.**

'ಮುಂಜಾವು' ಚಂದಾ ದರ: ಆಜೀವ ಚಂದಾ ೨೦೦ ರೂ
ವಾರ್ಷಿಕ ಚಂದಾ ೨೦ ರೂ; ಬಿಡಿ ಪ್ರತಿ ೪೦ ಪೈಸೆ

### ಪೋಲೀಸ್ ಇಲಾಖೆಗೆ ಸವಾಲಾದ ಘಟನೆ:

## ಜೈಲಿನಿಂದ ಕೈದಿಗಳು ಪರಾರಿ

ನ.ರಾ.ಪುರ: ಇಲ್ಲಿನ ಉಪಬಂದೀಖಾನೆಯಿಂದ ಅ.೨೭–೨೮ರ ರಾತ್ರಿ ಐವರು ಬಂದಿಗಳು ಮಾಳಿಗೆ ಕಿತ್ತು ಮಾಡಿನ ಹಂಚು ತೆಗೆದು ಪರಾರಿಯಾದ ಘಟನೆ ವರದಿಯಾಗಿದೆ. ಅವರಲ್ಲಿ ಮೂವರು ಶಿಕ್ಷೆಗೊಳಗಾದ ಬಂದಿಗಳು ಮತ್ತು ಇಬ್ಬರು ವಿಚಾರಣೆ ಎದುರಿಸುತ್ತಿದ್ದವರು.

ಬಾಳೆಹೊನ್ನೂರಿನ ಕಾಫಿ ಸಂಶೋಧನ ಕೇಂದ್ರದಲ್ಲಿ ಗುಮಾಸ್ತನಾಗಿದ್ದು ಹಣ ದುರುಪಯೋಗದ ಅಪರಾಧಕ್ಕಾಗಿ ೫ ವರ್ಷದ ಸಜೆ ಅನುಭವಿಸುತ್ತಿದ್ದ ರಮೇಶ, ಈಚೆಗಷ್ಟೇ ಬಂಧಿಸಲ್ಪಟ್ಟು ೧ ವರ್ಷದ ಶಿಕ್ಷೆಗೆ ಗುರಿಯಾಗಿದ್ದ ಕೊಡಗಿನ ಕುಖ್ಯಾತ ಕಾರು ಕಳ್ಳರಾದ ಗಣೇಶ ಮತ್ತು ಆರ್ಮುಗಂ, ಗಂಧದ ಕಳ್ಳಸಾಗಣೆಯ ಆರೋಪದಲ್ಲಿ ವಿಚಾರಣೆ ಎದುರಿಸುತ್ತಿರುವ ನಜೀರ್ ಅಹಮದ್, ಹಾಗೂ ಬಂಡಿಗಡಿಯ ಪಂಚಲೋಹ ವಿಗ್ರಹಕಳುವಿನ ಆರೋಪದ ಮೇಲೆ ಈಚೆಗೆ ಕೊಪ್ಪ ಪೋಲೀಸರಿಂದ ಬಂಧಿಸಲ್ಪಟ್ಟು ವಿಚಾರಣೆ ಎದುರಿಸುತ್ತಿದ್ದ ಹಾಲ್ಮುತ್ತೂರಿನ ಜಯರಾಮ—ಇವರೇ ಆ 'ಸಾಹಸಿಗಳು'.

ರಮೇಶ ೧೯೮೧ರಲ್ಲಿ ನ್ಯಾಯಾಲಯದಲ್ಲಿ ಶಿಕ್ಷೆ ಘೋಷಣೆಯಾಗುತ್ತಿದ್ದಂತೆಯೇ ಪರಾರಿಯಾಗಿ ಅನಂತರ ಬೆಂಗಳೂರಲ್ಲಿ ಸಿಕ್ಕಿ ಬಿದ್ದಿದ್ದವನು.

(೪ನೇ ಪುಟಕ್ಕೆ)

---

### ಶೃಂಗೇರಿ ಶರನ್ನವರಾತ್ರಿ ಉತ್ಸವ ಸಮಾಪ್ತಿ

ಶೃಂಗೇರಿ: ಇಲ್ಲಿನ ಅತಿ ಪ್ರಮುಖ ಉತ್ಸವವಾದ ಶರನ್ನವರಾತ್ರಿ ಪ್ರತಿ ವರ್ಷದಂತೆ ವೈಭವ, ಸಂಭ್ರಮದಿಂದ ನಡೆಯಿತು. ಸಹಸ್ರಾರು ಭಕ್ತರು ೧೫ ದಿನ ಪರ್ಯಂತ ವಿವಿಧ ಉತ್ಸವಗಳಲ್ಲಿ ಪಾಲ್ಗೊಂಡರು.

### ಲ್ಯಾಪ್ರೊಸ್ಕೊಪಿಕ್ ಚಿಕಿತ್ಸೆಗೆ 'ಧರ್ಮ'ದ ಆಕ್ಷೇಪಣೆ ಸಲ್ಲ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಮತ್ತು ಆರೋಗ್ಯ ಕೇಂದ್ರ ಜಂಟಿಯಾಗಿ ನ. ೪ಕ್ಕೆ ವ್ಯವಸ್ಥೆಗೊಳಿಸಿರುವ ಉದರದರ್ಶಕ ಸಂತಾನ ಹರಣ ಶಸ್ತ್ರಚಿಕಿತ್ಸಾ ಶಿಬಿರದಲ್ಲಿ ಭಾಗವಹಿಸಲು ಮುಸ್ಲಿಂ ಮಹಿಳೆಯರು ಒಪ್ಪುತ್ತಿಲ್ಲವೆಂದು ತಿಳಿದು ಬಂದಿದೆ.

ಸಂತಾನ ನಿರೋಧ ಖುರಾನಿಗೆ ವಿರುದ್ಧ ಎಂಬ ನಂಬಿಕೆ ಇದಕ್ಕೆ ಕಾರಣವೆನ್ನಲಾಗಿದೆ.

**ಭ್ರೂಣ ಹತ್ಯೆಯಲ್ಲ**

ಲ್ಯಾಪ್ರೊಸ್ಕೊಪಿಕ್ ಚಿಕಿತ್ಸೆ ಭ್ರೂಣಹತ್ಯೆಯಲ್ಲ. ಭ್ರೂಣಹತ್ಯೆ ಎಲ್ಲಾಧರ್ಮದವರಲ್ಲೂ ನಿಷಿದ್ಧವೆಂದು ನಂಬಿಕೆಯಿದೆ. ಆದರೆ ಸಂತಾನ ಮಿತಿ ಗೊಳಿಸುವುದನ್ನು ಮನುಷ್ಯಪ್ರೇಮವಿರುವ ಯಾವ ಧರ್ಮವೂ ನಿಷೇಧಿಸಲಾರದು.

ಕೇವಲ ಮುಸ್ಲಿಮರಾಗಿ ಹುಟ್ಟಿದ ಮಾತ್ರಕ್ಕೇ ಈ ದೇಶದಲ್ಲಿ ಅಪನಂಬಿಕೆಗೆ ಗುರಿಯಾಗಿರುವ; ಬಡತನ, ನಿರುದ್ಯೋಗ, ಅನಕ್ಷರತೆ, ರೋಗರುಜಿನಗಳಿಂದ ತೊಳಲುತ್ತಿರುವ ಕೋಟ್ಯಾಂತರ ಭಾರತೀಯ ಮುಸ್ಲಿಮರ ಬಗೆಗಾದರೂ ಇಲ್ಲಿನ ಮುಸ್ಲಿಂ ಮುಖಂಡರುಗಳು ವಾಸ್ತವಿಕತೆಯಿಂದ ಯೋಚಿಸುವುದು ಅಗತ್ಯ. ಈ ದೃಷ್ಟಿಯಿಂದ, ಅಪಾರ ಮನುಷ್ಯ ಪ್ರೇಮವನ್ನು ಹೊತ್ತ ಇಸ್ಲಾಂ ಮತ್ತು ಖುರಾನನ್ನು ಅವರು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

### ಕೊಪ್ಪ ತಾ.ಅ.ಮಂ.ಸದಸ್ಯ ಜಿ.ಎಸ್.ಶ್ರೀನಿವಾಸ್ ಮೇಲೆ ಹಲ್ಲೆ

ಕೊಪ್ಪ: ಇಲ್ಲಿನ ತಾ.ಅ.ಮಂ.ಸದಸ್ಯರಾದ ಗೋಳಿಕೊಪ್ಪದ ಜಿ.ಎಸ್.ಶ್ರೀನಿವಾಸ್ ಅವರ ಮೇಲೆ ಅ.೨೫ರ ರಾತ್ರಿ ತೀವ್ರವಾಗಿ ಹಲ್ಲೆ ನಡೆದಿದ್ದು, ಚಿಕ್ಕಮಗಳೂರಿನ ಆಸ್ಪತ್ರೆಗೆ ದಾಖಲಾಗಿರುವ ಅವರು ನಿಧಾನವಾಗಿ ಚೇತರಿಸಿ ಕೊಳ್ಳುತ್ತಿದ್ದಾರೆ.

ಈ ಸಂಬಂಧ ಕೊಪ್ಪ ಪಂಚಾಯ್ತಿ ಉಪಾಧ್ಯಕ್ಷ ಜಿ.ಡಿ.ಪರಮೇಶ್ವರ ಅವರನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ತಿಳಿದು ಬಂದಿದೆ.

ಹಳೆಯ ಸೇಡು ಹಲ್ಲೆಗೆ ಕಾರಣವೆನ್ನಲಾಗಿದೆ. ಇದರಿಂದಾಗಿ ಅವರು ಅ.೩೦ರ ಪಂ. ಅಧ್ಯಕ್ಷ ಚುನಾವಣೆಯಲ್ಲಿ ಭಾಗವಹಿಸಲಾಗಲಿಲ್ಲ.

### 'ಜಗ್ಗು'ಗೆ ಕೊಪ್ಪದಲ್ಲಿ ಚಿತ್ರೀಕರಣ

ಕೊಪ್ಪ: ತರುಣ ನಿರ್ದೇಶಕ ವಿಜಯ್ ಗುಜ್ಜಾರ್ ನಿರ್ದೇಶಿಸುತ್ತಿರುವ, ಜಯಗೋಪಾಲ್ ಚಿತ್ರ ಕತೆಯ ಬಣ್ಣದ ಚಿತ್ರ 'ಜಗ್ಗು'ಗಾಗಿ ಕೊಪ್ಪ ಮತ್ತು ಕೋಡಿಹಿತ್ಲಿನಲ್ಲಿ ಒಂದು ವಾರದಿಂದ ಚಿತ್ರೀಕರಣ ನಡೆಯುತ್ತಿದೆ.

ಜಗ್ಗುವಾಗಿ ಅಂಬರೀಶ್ ಅಭಿನಯಸುತ್ತಿದ್ದು, ಇತರ ಮುಖ್ಯ ಪಾತ್ರಗಳಲ್ಲಿ ಆರತಿ, ಜೈಜಗದೀಶ್ ಗೂಳಿ 'ರಾಮು' ಮುಂತಾದವರು ಚಿತ್ರೀಕರಣದಲ್ಲಿ ಪಾಲ್ಗೊಂಡಿದ್ದರು.

ಇದಕ್ಕೂ ಮೊದಲು ತೀರ್ಥಹಳ್ಳಿ ಸುತ್ತಮುತ್ತ ಚಿತ್ರೀಕರಣ ನಡೆದಿತ್ತು. ಸುಮಾರು ೧೪ ಸಾವಿರ ಅಡಿಗಳಷ್ಟಿರುವ ಈ ಚಿತ್ರ ಮುಕ್ತಾಯದ ಹಂತದಲ್ಲಿ ಇರುವುದಾಗಿ ವಿಜಯ್ 'ಮುಂಜಾವು'ಗೆ ತಿಳಿಸಿದರು.

### ಬೇಗಾರು ಸೇತುವೆ ರಿಪೇರಿ ಕೆಲಸ ಶುರುವಾಗಿಲ್ಲ

ಬೇಗಾರು: ಇಲ್ಲಿಗೆ ಸಮೀಪದ ಸೇತುವೆಯ ರಿಪೇರಿ ಕೆಲಸ ಇನ್ನೂ "ಶುರುವಾಗಿಲ್ಲ" ಎಂದು ತಿಳಿದು ಬಂದಿದೆ.

'ಮುಂಜಾವು'ಗೆ ಕೊಟ್ಟ ಮಾಹಿತಿಯಲ್ಲಿ ಲೋಕೋಪಯೋಗಿ ಇಲಾಖೆ ಸ॥ ಕಾ॥ ಇಂಜಿನಿಯರ್ ವೆಂಕಟಯ್ಯ ಅವರು "ಸೋಮವಾರದಿಂದಲೇ" (ಅ.೧೮) ಕೆಲಸ ಶುರುವಾಗುವುದಾಗಿ ತಿಳಿಸಿದ್ದರು.('ಮುಂಜಾವು' ೧೭–೧೦–೮೨)

ಪತ್ರಿಕೆಗಳಿಗೆ ಹೇಳಿಕೆ ಕೊಟ್ಟು ಪ್ರಚಾರ ಪಡೆದು ಇನ್ನೂ ಯಾಕೆ ಕೆಲಸ ಪ್ರಾರಂಭಿಸಿಲ್ಲ ಎಂದು ಜನ ಕೇಳುತ್ತಿದ್ದಾರೆ; ಇಲಾಖೆಯ ಬಗ್ಗೆ ವ್ಯಂಗ್ಯವಾಡುತ್ತಿದ್ದಾರೆ.

### ಅಡ್ಡಗದ್ದೆ ಬಳಿ ಮತ್ತೆ ಗಂಧವಶ; ಮೂವರ ಬಂಧನ

**ಶೃಂಗೇರಿ: ಅಡ್ಡಗದ್ದೆಯ ಬಳಿ ಸಿಂದೊಳ್ಳಿ ಎಂಬಲ್ಲಿ ಪುಸಃ ೨೫ ಸಾವಿರ ರೂ. ಬೆಲೆಯ ಶ್ರೀಗಂಧವನ್ನು ಶೃಂಗೇರಿ ಪೋಲೀಸರು ಪತ್ತೆ ಹಚ್ಚಿ ಮೂವರನ್ನು ಬಂಧಿಸಿದ್ದಾರೆ.**

ಈ ಒಂದು ತಿಂಗಳಿಂದೀಚೆಗೆ ಇಲ್ಲಿ ಇದು ಶ್ರೀಗಂಧ ಪತ್ತೆಯ ಎರಡನೆಯ ಪ್ರಕರಣವಾಗಿದೆ.

ಈ ಗಂಧ ಸಾಗಣೆ ಗುಂಪಿನ ಇನ್ನೊಬ್ಬ ವ್ಯಕ್ತಿ ತಲೆತಪ್ಪಿಸಿಕೊಂಡಿದ್ದು ಅವನಿಗಾಗಿ ಶೃಂಗೇರಿ ಪೋಲೀಸರು ತೀವ್ರವಾಗಿ ಹುಡುಕುತ್ತಿದ್ದಾರೆ.

**ಅವ್ಯವಹಾರದ ಕೇಂದ್ರಗಳ ಮೇಲೆ ತೀವ್ರ ದಾಳಿ**

ಈಚೆಗೆ ರಮಾನಂದ ರೈ ಶೃಂಗೇರಿ ಠಾಣಾಧಿಕಾರಿಯಾಗಿ ಬಂದಮೇಲೆ ಮಟ್ಕಾ ವ್ಯವಹಾರ, ಗಂಧ ಸಾಗಣೆ ಮುಂತಾದ ಅವ್ಯವಹಾರಗಳ ಮೇಲೆ ತೀವ್ರ ದಾಳಿಗಳನ್ನು ನಡೆಸುತ್ತಿರುವುದು ಆ ವ್ಯವಹಾರದ 'ಒಳ ಪ್ರಪಂಚ'ದಲ್ಲಿ ತಲ್ಲಣ ಹುಟ್ಟಿಸಿರುವಂತೆ ಜನ ಸಾಮಾನ್ಯರ ಅಭಿನಂದನೆಗೂ ಪಾತ್ರವಾಗಿರುವುದಾಗಿ ಹೇಳಲಾಗಿದೆ.

### ಜಿ.ಡಿ.ಪರಮೇಶ್ವರ ಕೊಪ್ಪ ಪಂಚಾಯ್ತಿ ಹೊಸ ಅಧ್ಯಕ್ಷ

ಕೊಪ್ಪ: ಇಲ್ಲಿನ ಗ್ರಾಮ ಪಂಚಾಯ್ತಿಗೆ ಅ. ೩೦ ರಂದು ನಡೆದ ಅಧ್ಯಕ್ಷ ಚುನಾವಣೆಯಲ್ಲಿ ಗುಣವಂತೆಯ ಜಿ.ಡಿ.ಪರಮೇಶ್ವರ ಜಯಗಳಿಸಿದ್ದಾರೆ.

ಅವರಿಗೆ ೬ ಮತಗಳೂ ಇನ್ನೊಬ್ಬ ಅಭ್ಯರ್ಥಿ ಸಿಗದಾಳಿನ ಎಸ್.ಪಿ.ಚಂದ್ರಶೇಖರ್‌ಗೆ ೫ ಮತಗಳೂ ಬಂದಿದ್ದು ಒಂದು ಮತ ಅಸಿಂಧುವಾಯಿತು. ೩ ಜನ ಸದಸ್ಯರು ಗೈರುಹಾಜರಾಗಿದ್ದರು.

ಹೊಸ ಅಧ್ಯಕ್ಷರ ಅವಧಿ ೧೯೮೪ರ ನವೆಂಬರ್ ವರೆಗಿರುತ್ತದೆ. ೧೯೮೦ರ ನವೆಂಬರಿನಲ್ಲಿ ನಡೆದ ಚುನಾವಣೆಯಲ್ಲಿ ಅಧ್ಯಕ್ಷರಾದ ಸಿಗದಾಳಿನ ಎಸ್.ಪಿ.ರಾಮಚಂದ್ರರಾವ್ ಈಚೆಗಷ್ಟೇ ರಾಜೀನಾಮೆ ಸಲ್ಲಿಸಿದ್ದರು.

ಇನ್ನಾದರೂ ಪಂಚಾಯ್ತಿಯೊಳಗೆ ಅಭಿವೃದ್ಧಿ ಕೆಲಸಗಳು ನಡೆಯುತ್ತವೆಯೆಂದು ನಿರೀಕ್ಷಿಸಲಾಗಿದೆ.

### ಹಳ್ಳದ ಅಣೆಕಟ್ಟಿನ ನಿರೀಕ್ಷೆಯಲ್ಲೇ ಲೋಕ ಬಿಟ್ಟ ಕಾನೂರು ಹರಿಜನರು

ನರಸಿಂಹರಾಜಪುರ: ಈ ತಾಲ್ಲೂಕಿನ ಕಾನೂರು ಒಂದು ಕುಗ್ರಾಮ. ಇಲ್ಲಿ ಸುಮಾರು ೧೫–೧೬ ಹರಿಜನ ಕುಟುಂಬಗಳಿವೆ. ಅವರೆಲ್ಲ ೨೦ ವರ್ಷಗಳ ಹಿಂದೆ ಭದ್ರಾ ಮುಳುಗಡೆ ಪ್ರದೇಶದಿಂದ ಬಂದು ನೆಲೆಸಿದವರು. ಅವರಿಗೆ ತಲಾ ೪ ಎಕ್ರೆ ಭೂಮಿ ಕೂಡ ಕೊಡಲಾಗಿದೆ.

ಆದರೆ ಆ ಭೂಮಿಗೆ ನೀರಿನ ಆಶ್ರಯ ಅತಂತ್ರ. ಸೆಪ್ಟೆಂಬರ್ – ಅಕ್ಟೋಬರ್ ಹೊತ್ತಿಗೆಲ್ಲ ನೀರಿಲ್ಲದೆ ಪೈರು ಒಣಗುತ್ತದೆ. ಹಾಗೆಂದು ಬೆಳೆ ತೆಗೆಯದೆ ಇರಲು ಆಗುವುದಿಲ್ಲವಲ್ಲ.

(೪ನೇ ಪುಟಕ್ಕೆ)

---

# ಇರಾನ್ : ಬಾಣಲೆಯಿಂದ ಬೆಂಕಿಗೆ .... ?

ಕ್ರೂರ ಶಹನ ಆಳ್ವಿಕೆಯ ವಿರುದ್ಧ ಸತತ ಹೋರಾಟ ಮಾಡಿ ಈಗ್ಗೆ ಮೂರು ವರ್ಷದ ಹಿಂದೆ ಅವನನ್ನು ಓಡಿಸಿದ ಇರಾನಿನ ಜನರ ಸ್ಥಿತಿ ಇಂದು ಬಾಣಲೆಯಿಂದ ಬೆಂಕಿಗೆ ಬಿದ್ದಂತಾಗಿದೆ. ಇಸ್ಲಾಂ ಧರ್ಮದ ಹೆಸರಲ್ಲಿ ಮತಾಂಧ ಖೊಮೇನಿ ಮತ್ತು ಅವನ ಕೂಟ ಇಸ್ಲಾಮಿಗೆ, ಪೈಗಂಬರರ ಬೋಧನೆಗೆ ತದ್ವಿರುದ್ಧವಾಗಿ ನಡೆಸಿರುವ ನರಹತ್ಯೆ ಮಾನವ ಜನಾಂಗಕ್ಕೇ ಕಳಂಕಪ್ರಾಯವಾಗಿದೆ; ಯಾವುದೇ ಧರ್ಮದ ಹೆಸರಲ್ಲಿ, ಪ್ರಪಂಚದ ಯಾವುದೇ ಭಾಗದಲ್ಲಿ ಮತಾಂಧರು ನಡೆಸ ಬಹುದಾದ ಬರ್ಬರತೆಗೆ ದಿಕ್ಸೂಚಿಯಾಗಿದೆ.

ಇರಾನಿನ ಇಂದಿನ ಪರಿಸ್ಥಿತಿಯ ಕುರಿತ ಈ ಕಿರು ಮಾಹಿತಿಯನ್ನು, ಅಲ್ಲಿ ಮಾನವ ಹಕ್ಕುಗಳನ್ನು ರಕ್ಷಿಸಲು ಹಾಗೂ ಖೊಮೇನಿಯ ಪ್ರಭುತ್ವವನ್ನು ವಿರೋಧಿಸಿ ಜನಾಭಿಪ್ರಾಯ ಮೂಡಿಸಲು ಪ್ರಯತ್ನಿಸುತ್ತಿರುವ 'ಇರಾನಿನ ಮಾನವ ಹಕ್ಕುಗಳ ವೇದಿಕೆ, ಬೆಂಗಳೂರು' ಹೊರಡಿಸಿದ ಕರಪತ್ರದಿಂದ ಆಯ್ದು ಕೊಂಡಿದೆ.

ನಮ್ಮ ತುರ್ತುಪರಿಸ್ಥಿತಿಯಲ್ಲಿ ವಿದೇಶಗಳಲ್ಲಿದ್ದ ಭಾರತೀಯರ ಇಂಥವೇ ಸಂಘಟನೆಗಳು ಇದೇ ರೀತಿ ಸೇವೆ ಸಲ್ಲಿಸಿದವೆಂಬುದು ಇಲ್ಲಿ ಗಮನಾರ್ಹ.

---

ಮುಂಗಾರಿಗೊಸ್ಡ ನಿಂತ ಭೂಮಿಯೊಡಲಿಗೆ ರಕ್ತಚೆಲ್ಲುವ
ಬಟ್ಟಬಯಲಲ್ಲಿ ನಗುವ ಕಾಡಹೂವಿಗೆ ಕೊಳ್ಳಿಯಿಕ್ಕುವ
ಬದುಕಲ್ಲಿ ಬರೀ ಸಾವನ್ನೇ ಕಂಡು
ಬೆಚ್ಚಿ ಬೀಳುವ
ಇವರ ಜಗತ್ತಿನಲ್ಲಿ—
ಕತ್ತಲು ಮುತ್ತಿದ ಕೋಣೆಗಳಿವೆ
ಕಪ್ಪನೆಯ ಬೂಟುಗಳು, ಕಬ್ಬಿಣದ ಸರಳುಗಳು
ಉಸಿರಾಡುವ ಮನಸ್ಸುಗಳಿಗೆ ಚೂಪಾದ ಚೂರಿಗಳಿವೆ.
ಸರಳುಗಳ ನೆರಳಲ್ಲಿ ಜೀವ ಹೊತ್ತಿರುವ
ಅಸ್ಥಿಪಂಜರಗಳೆದೆಯಲ್ಲಿ
ಹೊತ್ತಿಉರಿಯಬಲ್ಲ ಬೆಂಕಿಯುಳಿದಿದೆ.
ಸೆರೆಮನೆಯ ಗೋಡೆಗಳು ಸಿಡಿದು ಚೂರಾಗುವ ತನಕ
ಎದೆಯೊಳಗಿನ ಕೆಂಡ ಭುಗಿಲೆದ್ದು ಬೆಂಕಿಯಾಗುವ ತನಕ
ಮಾನವನ ರಕ್ತ ಮಾಂಸದ ರುಚಿ ಕಂಡ ಈ ನಾಡಲ್ಲಿ
ಸೂರ್ಯ ಬೆಳಗುವದಿಲ್ಲ.

ಇರಾನ್, ಇಂದು ಸಂಕ್ಷೋಭೆಯಲ್ಲಿರುವ ರಾಷ್ಟ್ರ. ಸ್ವಾತಂತ್ರ್ಯ, ಪ್ರಜಾಪ್ರಭುತ್ವಗಳಿಗಾಗಿ ನಡೆಯುತ್ತಿರುವ ಜನತಾ ಚಳವಳಿಗಳನ್ನು ಬಗ್ಗು ಬಡಿಯುವಲ್ಲಿನ ಈಗಿನ ಸರ್ಕಾರದ ಪ್ರಯತ್ನ ಇರಾನಿನ ಚರಿತ್ರೆಯಲ್ಲಿಯೇ ಹೊಸದು.

ಸುಮಾರು ನಲವತ್ತು ಸಾವಿರ ರಾಜಕೀಯ ಕೈದಿಗಳನ್ನು ದಸ್ತಗಿರಿ ಮಾಡಿ ಚಿತ್ರಹಿಂಸೆ ಕೊಡಲಾಗುತ್ತಿದೆ. ವಿದ್ಯುತ್ ಶಾಕ್ ಕೊಡುವುದು, ಕೆಂಪಗೆ ಕಾದ ಕಬ್ಬಿಣದ ಸಲಾಕೆಯಿಂದ ಸುಡುವುದು, ಸಾರ್ವಜನಿಕ ಸ್ಥಳಗಳಲ್ಲಿ ನೇಣು ಹಾಕುವುದು – ಹೀಗೆ ಅವ್ಯಾಹತವಾಗಿ ದಬ್ಬಾಳಿಕೆ ಸಾಗಿದೆ.

ಏರುತ್ತಿರುವ ಬೆಲೆಗಳು, ಆಹಾರಾಭಾವ, ನಲವತ್ತು ಲಕ್ಷಕ್ಕೆ ಏರಿರುವ ಭೀಕರ ನಿರುದ್ಯೋಗ, ಇರಾಕ್ ಜೊತೆಗಿನ ಅನಾವಶ್ಯಕ ಯುದ್ಧದಿಂದಾಗಿ ಸಾಕಬೇಕಾಗಿರುವ ೨೦ ಲಕ್ಷ ನಿರಾಶ್ರಿತರು–ಹೀಗೆ ದಿನ ದಿನಕ್ಕೆ ಆರ್ಥಿಕ ಸ್ಥಿತಿ ಹದಗೆಡುತ್ತಿದ್ದರೆ ಖೊಮೇನಿ ಸರ್ಕಾರ ಈ ಆಂತರಿಕ ಸಮಸ್ಯೆಗಳತ್ತ ಗಮನ ನೀಡದೆ ಇರಾಕ್ ಜೊತೆಗಿನ ಯುದ್ಧದತ್ತ ಸಾರ್ವಜನಿಕ ಅಭಿಪ್ರಾಯವನ್ನು ಸೆಳೆಯುತ್ತಿದೆ.

ಎರಡು ವರ್ಷಗಳಿಂದ ಶಾಲಾ–ಕಾಲೇಜುಗಳನ್ನು ಮುಚ್ಚಲಾಗಿದೆ. ವಿರೋಧಿ ಬಣದ ಪತ್ರಿಕೆಗಳ ಹಾಗೂ ಲೇಖಕರ ಬಾಯಿ ಮುಚ್ಚಿಸಲಾಗಿದೆ. ಮಹಿಳೆಯರ ಮೇಲಿನ ಅತ್ಯಾಚಾರ, ಶೋಷಣೆ, ಜೈಲುಗಳಲ್ಲಿ ಮಾನಭಂಗ ನಿರಂತರವಾಗಿ ಸಾಗಿದೆ. ಕಾರ್ಮಿಕರ ಹಕ್ಕುಗಳನ್ನು ನಿರಾಕರಿಸಲಾಗಿದೆ. ಇರಾನಿನ ಅಲ್ಪಸಂಖ್ಯಾತ ಜನಾಂಗಗಳಾದ ಕುರ್ದಿಯರ, ಬಹಾಯಿಗಳ ಸ್ವಾತಂತ್ರ್ಯಗಳನ್ನು ಮೊಟಕುಗೊಳಿಸಲಾಗಿದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಇರಾನ್ ತನ್ನ ಜನತೆಯ ವಿರುದ್ಧ ನಿಂತಿದೆ. ಖೊಮೇನಿ ಆಡಳಿತಕ್ಕೆ ತನ್ನ ವಿರೋಧಿಗಳನ್ನು ಬಗ್ಗು ಬಡಿಯುವುದೇ ಕೆಲಸವಾಗಿದೆ.

ಸರ್ಕಾರದ ಇಂತಹ ಶೋಷಣೆ, ದಬ್ಬಾಳಿಕೆ, ನಿರಂಕುಶ ಪ್ರಭುತ್ವ, ಮಾನವ ಹಕ್ಕುಗಳ ನಿರಾಕರಣೆಯ ವಿರುದ್ಧ ಕ್ರಾಂತಿಕಾರಿ ಬದಲಾವಣೆಯಲ್ಲಿ ನಂಬಿಕೆಯಿಟ್ಟು ಜನ ಹೋರಾಡುತ್ತಿದ್ದರೆ, ವಿದೇಶಗಳಲ್ಲಿ ವಿದ್ಯಾಭ್ಯಾಸಕ್ಕೆಂದು ಬಂದಿರುವ ಸಾವಿರಾರು ಇರಾನೀಯರು ತಮ್ಮ ದೇಶದಲ್ಲಿನ ಜನಪರ ಚಳುವಳಿಗಳಿಗೆ ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಸಾರ್ವಜನಿಕಾಭಿಪ್ರಾಯ ರೂಪಿಸುವಲ್ಲಿ ನಿರತರಾಗಿದ್ದಾರೆ. ತಮ್ಮ ದೇಶದಲ್ಲಿನ ಸಾಮಾಜಿಕ ಬದಲಾವಣೆಗೆ ಪಣತೊಟ್ಟ ಇರಾನ್ ವಿದ್ಯಾರ್ಥಿಗಳು ಭಾರತದಲ್ಲಿ, ಅದರಲ್ಲೂ ಮುಖ್ಯವಾಗಿ ಬೆಂಗಳೂರಿನಲ್ಲಿ ಖೊಮೇನಿ ಪರ ಇರಾನಿ ವಿದ್ಯಾರ್ಥಿಗಳಿಂದ ತೊಂದರೆ-ಬೆದರಿಕೆಗಳಿಗೆ ಈಡಾಗಿದ್ದಾರೆ. ಇಂತಹ ಅನೇಕ ವಿದ್ಯಾರ್ಥಿಗಳಿಗೆ ಅವರ ಕುಟುಂಬದಿಂದ ಬರುತ್ತಿದ್ದ ಹಣ ಕಾಸಿನ ನೆರವನ್ನು ಅಲ್ಲಿನ ಸರ್ಕಾರ ತಪ್ಪಿಸಿದೆ. ಭಾರತ ಸರ್ಕಾರ ಬಹಿಷ್ಕರಿಸಿದ್ದರೂ ಸಹ ಇಸ್ಲಾಮಿಕ್ ವಿದ್ಯಾರ್ಥಿಗಳ ಒಕ್ಕೂಟ ಇರಾನ್ ರಾಯಭಾರ ಕಛೇರಿಯಿಂದ ಹಣ ಪಡೆಯುತ್ತಿದೆ. ಅನೇಕ ವಿರೋಧಿ ವಿದ್ಯಾರ್ಥಿಗಳನ್ನು 'ಕಪ್ಪು ಪಟ್ಟಿ'ಯಲ್ಲಿ ಸೇರಿಸಲಾಗಿದೆ. ಅವರು ಇರಾನಿಗೆ ಹಿಂತಿರುಗಿದರೆಂದರೆ ದಸ್ತಗಿರಿ ಮಾಡಿ, ಗಲ್ಲಿಗೇರಿಸಲು ನಿರ್ಧರಿಸಲಾಗಿದೆ ....

# ಎಲೆಯ ಮರೆಯ ಕ್ಷೇತ್ರ ಶ್ರೀಕಮಂಡಲ

ಶ್ರೀ ಕಮಂಡಲ ಕ್ಷೇತ್ರವು, ಕೊಪ್ಪ–ಕೆಸವೆ ರಸ್ತೆಯಲ್ಲಿ ಕೊಪ್ಪದಿಂದ ಸುಮಾರು ೨ ಕಿ.ಮೀ. ದೂರದಲ್ಲಿದೆ. ಇದೊಂದು ಪುರಾತನ ಋಷ್ಯಾಶ್ರಮದಂತೆ ಇದೆ. ಸುಂದರವಾದ ವನರಾಜಿಯ ನಡುವೆ ೭ ಅಡಿ ಉದ್ದ ೭ ಅಡಿ ಅಗಲದ ಎರಡೂವರೆ ಆಳದ ಚೌಕವಾದ ಒಂದು ಕೊಳವಿದ್ದು, ಅದಕ್ಕೆ ಸುತ್ತಲೂ ಕಾಡು ಕಲ್ಲು, ಚಪ್ಪಡಿಗಳ ಕಟ್ಟಣೆ ಇದ್ದು ಅದರಲ್ಲಿ ಒಂದು ಪುರಾತನವಾದ ದ್ವಿಭುಜ ಗಣಪತಿ ವಿಗ್ರಹವನ್ನು ಪ್ರತಿಷ್ಠಾಪಿಸಿರುತ್ತಾರೆ.

ಗಣಪತಿಯ ಮುಂಭಾಗದಲ್ಲಿ ಸುಮಾರು ಒಂದೂವರೆ ಅಡಿ ದೂರದಲ್ಲಿ ಸುಮಾರು ೯ ಅಂಗುಲ ವ್ಯಾಸದ ಒಂದು ಹೊಂಡವಿದ್ದು ಇದರಿಂದ ಸದಾ ಕಾಲ ಒಂದು ನೀರಿನ ಚಿಲುಮೆ ಉಕ್ಕಿ ಹರಿಯುತ್ತಿರುತ್ತದೆ. ಇದಕ್ಕೆ ಕಮಂಡಲ ಎಂದು ಹೆಸರು. ಇದಕ್ಕೆ ದೇವಸ್ಥಾನದಿಂದ ಸುಮಾರು ೫೦ ಅಡಿ ದೂರದವರೆಗೆ ಪೈಪ್ ಹಾಕಿ, ಅಲ್ಲಿ ಕಟ್ಟೆ ಕಟ್ಟಿ ೫ ಅಡಿ ಎತ್ತರದಿಂದ ನೀರು ಧುಮುಕುವಂತೆ ಮಾಡಿದ್ದು ಭಕ್ತಾದಿಗಳಿಗೆ ಸ್ನಾನಕ್ಕೆ ವ್ಯವಸ್ಥೆ ಮಾಡಿರುತ್ತಾರೆ. ಪ್ರತಿವರ್ಷ ಇಲ್ಲಿಗೆ ಸಾವಿರಾರು ಜನ ಭಕ್ತರು ಬಂದು ತೀರ್ಥ ಸ್ನಾನ ಮಾಡಿ ಶ್ರೀ ಗಣಪತಿ ದರ್ಶನ ಪಡೆಯುತ್ತಾರೆ. ಈ ಸ್ಥಳಕ್ಕೆ ಬ್ರಾಹ್ಮೀನದಿ ಮೂಲವೆಂದು ಐತಿಹ್ಯವಿದೆ.

ಈ ದೇವಸ್ಥಾನದಲ್ಲಿ ಗರ್ಭಗುಡಿಯೇ ಇಲ್ಲದಿರುವುದರಿಂದ ಧರ್ಮದರ್ಶಿ ಸಮಿತಿಯವರು ಭಕ್ತರ ಮತ್ತು ಸರ್ಕಾರದ ನೆರವಿನಿಂದ ಒಂದು ಗರ್ಭಗುಡಿ, ಮುಖಮಂಟಪಗಳನ್ನು ಹಾಗೂ ಸರ್ಕಾರದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ ನೆರವಿನಿಂದ ಒಂದು ಕಲ್ಯಾಣ ಮಂಟಪವನ್ನೂ ನಿರ್ಮಿಸಬೇಕೆಂದು ಯೋಚಿಸಿ ಕಾರ್ಯ ಪ್ರವೃತ್ತರಾಗಿರುತ್ತಾರೆ.

ಎತ್ತರ ಪ್ರದೇಶದಲ್ಲಿ ದಟ್ಟ ಕಾಡಿನ ತಂಪಿನ ನಡುವೆ ಇರುವ ಈ ರಮ್ಯ ತಾಣ, ಪುಣ್ಯ ತುಂಬಿಕೊಳ್ಳಬೇಕೆನ್ನುವವರಿಗೆ ಪುಣ್ಯ ಕ್ಷೇತ್ರವಾಗಿರುವಂತೆಯೇ ನಿಸರ್ಗ ಪ್ರೇಮಿಗಳಿಗೆ ಒಳ್ಳೆಯ ವಿಹಾರ ಸ್ಥಳವೂ ಹೌದು. ಶಾಲಾ ಮಕ್ಕಳಿಗೆ ವನ ಭೋಜನಕ್ಕೆ ಅತ್ಯುತ್ತಮವಾದ ಜಾಗ.

ಈ ಕ್ಷೇತ್ರಕ್ಕೆ ಸೈಕಲ್, ಮೋಟರ್ ಸೈಕಲ್ ಮತ್ತು ಕಾರಿನಲ್ಲಿ ಸಹ ಹೋಗಬಹುದಾಗಿರುತ್ತೆ. (ಒಂದು ೫೦ ಗಜದಷ್ಟು ದೂರ ನಡೆಯಬೇಕಾಗುತ್ತೆ.)

**ಕೆ.ಟಿ.ನಾಗೇಂದ್ರ ರಾವ್**
**ಸಂಚಾಲಕರು, ಕಮಂಡಲ ಗಣಪತಿ ದೇವಸ್ಥಾನ**

---

## 'ಭ್ರಮೆ'

ಅನಿಸುವುದೊಮ್ಮೊಮ್ಮೆ—
ಈ ಜೀವನದ ತುಂಬೆಲ್ಲ ಮುತ್ತಿಕೊಂಡಿರುವುದು
ಬರಿಯ ಭ್ರಮೆಯೆಂಬ ಜೇನ್ನೊಣಗಳು !
ಆಶಿಸುವುದೆಲ್ಲ ಭ್ರಮೆ, ಕಲ್ಪಿಸುವುದೆಲ್ಲ ಭ್ರಮೆ
ಮನ ಬಯಸಿದಾಶೆಗಳೆಲ್ಲ ಶೇಷವಾಗುವವು ಭ್ರಮೆಯಾಗಿ
ಗೋಚರಿಸುವುದಾಗ ಮನಕೆ ಪ್ರಪಂಚವೇ ಶೂನ್ಯವಾಗಿ !
"ಎಟುಕದಾ ದ್ರಾಕ್ಷಿ ಹುಳಿ" – ಅಂತೆಯೇ ಈಡೇರದಿರೆ
ನಮ್ಮಾಸೆ ಆಕಾಂಕ್ಷೆ ಆಗೆಲ್ಲವೂ ಶೂನ್ಯ ....
ಅನಿಸುವುದು ಮರುಗಳಿಗೆಯಲಿ : ಜೀವೆಂಬ
ಆಸೆಯನು ಸಂಪೂರ್ಣವಾಗಿ ತೊರೆಯಬೇಕೆಂದು—
ಈ ಕ್ಷಣಿಕ ಜೀವನದಲಿ !
ಯೌವನದಲ್ಲಿದಕೆ ಪ್ರೀತಿಯಿಲ್ಲದಿರುವಾಗ
ಉಳಿಯುವುದು ಎಲ್ಲವೂ ಹುಚ್ಚುಚ್ಚು ಭ್ರಮೆಯಾಗಿ ....
ಮನದ ಮೂಲೆಯಲಿ ಮಿಡಿಯುತಿದೆ "ಈಸಬೇಕು ಇದ್ದು
ಜಯಿಸಬೇಕೆ"ಂಬ ನಾಣ್ಣುಡಿಯು !
ಜೀವನ ಮರವನಾಶ್ರಯಿಸಿರುವ ಭ್ರಮೆಯೆಂಬ
ಜೇನ್ನೊಣಗಳ ಹುಟ್ಟು ಸುಟ್ಟು ಬಿಡಬೇಂಬ –
ಭ್ರಮೆಯ ಲಹರಿ ನಿಲ್ಲುವುದೋ....ಓಡುವುದೋ .... ? ?

—ಭವಾನಿ ಆರ್.ಪಿ. ಹೆಬ್ಬಾರ್.
ಬೈರೇದೇವರು ಎಸ್ಟೇಟ್.

---

## ನಲ್ಲೆ ಹೇಳಿದ್ದು

ನೀನು ಚಂದ್ರ ; ನೀನು ಇಂದ್ರ :
ಚಂದ್ರ—
ಪ್ರೇಮ ಚಂದ್ರಿಕೆಯ ಬೀರುತಿ ;
ಇಂದ್ರ—
ಪ್ರಣಯಸ್ವರ್ಗಕೆ ಅಧಿಪತಿ!

—ಲಲಿತಾತ್ಮಜ

## ಓದುಗರ ಪತ್ರಗಳು

# ಕಮಂಡಲ ಗಣಪತಿ: ಕೆಸವೆ ಗಜಾನನ ಯುವಕ ಸಂಘದವರ ಹೇಳಿಕೆ

'ಮುಂಜಾವು' ಸಂಪಾದಕರಲ್ಲಿ,

"ಶ್ರೀ ಕಮಂಡಲ ಗಣಪತಿ ಜಲಸಮಾಧಿ" ಎಂಬ ವಿಷಯದಲ್ಲಿ ತಮ್ಮ ಪತ್ರಿಕೆಯ ತಾ. ೧೭-೧೧-೮೩ ರಲ್ಲಿನ ಶ್ರೀ ಕಳಸಪ್ಪನವರ ಪತ್ರಕ್ಕೆ ಸ್ಪಷ್ಟೀಕರಣ:

ಶ್ರೀ ಕಳಸಪ್ಪನವರು ನಮ್ಮ ಯುವಕ ಸಂಘದ ಅಧ್ಯಕ್ಷರಾಗಿದ್ದು ಅವರ ಅಧ್ಯಕ್ಷತೆಯಲ್ಲಿ ತಾ. ೫-೯-೮೩ ರಂದು ನಡೆದ ಸಭೆಯಲ್ಲಿನ ತೀರ್ಮಾನದಂತೆಯೇ ನಾವು ಊರಿನವರೆಲ್ಲರ ಮತ್ತು ಮಹಿಳಾ ಸಮಾಜದವರ ಸಹಕಾರದಿಂದ ಆರು ದಿನಗಳ ಕಾಲ ಶ್ರೀ ಕಮಂಡಲ ಕ್ಷೇತ್ರದಲ್ಲಿ ಅತ್ಯಂತ ಅಗತ್ಯವಾಗಿ ಆಗಬೇಕಾಗಿದ್ದ ಮಣ್ಣು ತೆಗೆದು ಹೊಂಡ ಭರ್ತಿಮಾಡಿ ಅಂಗಳವನ್ನು ವಿಸ್ತರಿಸುವ ಕೆಲಸ ಮಾಡಿರುತ್ತೇವೆ. ಈ ಕೆಲಸವನ್ನು ತಾಲ್ಲೋಕ್ ತಹಶೀಲ್ದಾರ್‌ರವರೂ, ಬಿ. ಡಿ. ಓ ಅವರೂ, ತಾ. ಅ. ಮಂ. ಅಧ್ಯಕ್ಷರೂ, ಕೃಷಿಸಹಾಯಕ ನಿರ್ದೇಶಕರೂ, ಮತ್ತಿತರ ಗಣ್ಯ ವ್ಯಕ್ತಿಗಳೂ ಸಹ ನೋಡಿ ಸಂತೋಷಪಟ್ಟು ನಾವು ಮಾಡಿರುವ ಕೆಲಸವನ್ನು ಮೆಚ್ಚಿಕೊಂಡಿರುತ್ತಾರೆ. ಅವರೆ ನಮ್ಮ ಸಂಘದ ಅಧ್ಯಕ್ಷರಾಗಿದ್ದೂ, ಆರು ದಿನಗಳ ಶ್ರಮದಾನದ ಕಾಲದಲ್ಲಿ ಒಂದು ದಿನ, ಅಷ್ಟೇಕೆ ಒಂದು ಘಂಟೆ ಸಹ ಅಲ್ಲಿಗೆ ಬಂದು ನಮ್ಮ ಕೆಲಸದಲ್ಲಿ ಸಹಕರಿಸದೆ, ನಮಗೆ ಊಟ, ತಿಂಡಿ, ಕಾಫಿ ಮೊದಲಾದವನ್ನು ಸ್ವಂತ ಖರ್ಚಿನಲ್ಲಿ ಒದಗಿಸಿ ಸರಿಸ್ಮಟ್ಟಿಗೆ ಕೆಲಸವನ್ನು ಸಹ ಮಾಡಿ ಸಂಪೂರ್ಣ ಸಹಕಾರ ಕೊಟ್ಟಿರುವ ಸಂಚಾಲಕರಿಗೆ ಅವಹೇಳನ ಮಾಡುವಂತಹ ಹೇಳಿಕೆ ಕೊಟ್ಟಿರುವುದು ತುಂಬಾ ವಿಷಾದನೀಯವಾಗಿದೆ. ಅಲ್ಲದೆ ಅವರೇ ರಾತ್ರಿ ಕಾಲದಲ್ಲಿ ಬಂದು ನೀರು ಹೋಗಲು ಹಾಕಿದ್ದ ಪೈಪುಗಳನ್ನು ಒಡೆದು ಮಧ್ಯ ಅಂಗಳದಲ್ಲಿ ಅಗಳು ತೆಗೆದು ಮಣ್ಣನ್ನು ಕೊರದು... ನಮ್ಮೆಲ್ಲರ ಶ್ರಮವನ್ನು ಹಾಳು ಮಾಡಿ ದೇವಸ್ಥಾನದ ಅಭಿವೃದ್ಧಿ ಕಾರ್ಯಕ್ಕೆ ಧಕ್ಕೆ ತಂದಿರುತ್ತಾರಲ್ಲದೆ ಇದರಲ್ಲಿ ಸಂಚಾಲಕರ ಯಾವ ರಾಜಕೀಯವೂ ಇಲ್ಲ ಎಂದು ಸ್ಪಷ್ಟಪಡಿಸಲು ಇಚ್ಛಿಸುತ್ತೇವೆ.

**—ನೊಂದ ಸದಸ್ಯರು**
ಶ್ರೀ ಗಜಾನನ ಯುವಕ ಸಂಘ
ಕೆಸವೆ. ಕೊಪ್ಪ (ತಾ)

## ಮೂತ್ರಿಯಿಲ್ಲ

ಸ್ವಾಮಿ,

ಕೊಪ್ಪ ತಾ|| ಹಿರೇಕೊಡಿಗೆ ಪಂಚಾಯ್ತಿಗೆ ಒಳಪಟ್ಟ ಸೂರ್ಯದೇವಸ್ಥಾನದಲ್ಲಿ ಇರುವ ಬಸ್ ನಿಲ್ದಾಣಕ್ಕೆ ದುರಸ್ತಿ ಅಗತ್ಯವಿದೆ. ಹಾಗೆಯೇ ಅದಕ್ಕೆ ಹತ್ತಿರದಲ್ಲಿ ಪ್ರಯಾಣಿಕರಿಗಾಗಿ ಒಂದು ಮೂತ್ರಿಯ ಅವಶ್ಯಕತೆಯಿದೆ. ಬಸ್ ನಿಲ್ದಾಣದ ಅಕ್ಕ ಪಕ್ಕ ಮನೆಗಳಿದ್ದು, ಬಸ್‌ಗೆ ಕಾಯುವವರಿಗೆ— ಮುಖ್ಯವಾಗಿ ಮಹಿಳೆಯರಿಗೆ — ಮೂತ್ರಿಯಿಲ್ಲದೆ ಬಹಳ ತೊಂದರೆಯಾಗಿದೆ. ಆದ್ದರಿಂದ ಗ್ರಾಮ ಪಂಚಾಯಿತಿ ಅಥವಾ ತಾ|| ಬೋರ್ಡಿನವರು ಒಂದು ಮೂತ್ರಿಯನ್ನು ಕಟ್ಟಿಸಲೆಂದು ಸಾರ್ವಜನಿಕರ ಪರವಾಗಿ ಕೋರುತ್ತೇನೆ.

**—ಹೆಚ್. ಟಿ. ಕೃಷ್ಣಮೂರ್ತಿ.**
ಹಿರೇಕೊಡಿಗೆ.

# ಪೋಲೀಸ್ ವ್ಯವಸ್ಥೆಯ ದುರವಸ್ಥೆ

ಸಬ್ ಇನ್ಸ್‌ಪೆಕ್ಟರ್ ಪುಟ್ಟಸ್ವಾಮಿ ಗೌಡರು ಸಸ್ಪೆಂಡ್ ಆದಾಗ ಪ್ರತಿಭಟಿಸಿ ಕೊಪ್ಪ ಬಂದ್ ಮಾಡಬೇಕೆಂದು ಹೊರಟಿದ್ದ ಕೊಪ್ಪದ ಅದೇ ಜನ ಸರ್ಕಲ್ ಇನ್ಸ್‌ಪೆಕ್ಟರ್ ಸಸ್ಪೆಂಡ್ ಆದ ಸುದ್ದಿಗೆ ಖುಷ್ — ಖಾರ ಹಚ್ಚಿ ಮೆಲ್ಲುತ್ತಿದ್ದಾರೆ. ಅವರ ಅಮಾನತಿಗೆ ಎಸ್ಪಿಯವರು ಕೊಡುವ ಕಾರಣ ನಿಜವೇ ಇರಲೂಬಹುದು. ಆದರೆ ಜನ ಅದನ್ನು ನಂಬಿಲ್ಲ. ಜನರದಾಗಲಿ, ಅಧಿಕಾರಿಗಳದಾಗಲಿ, ಕೈಕೆಳಗಿನ ಸಿಬ್ಬಂದಿಗಳದಾಗಲಿ ಗೌರವ, ... ಗಳನ್ನು ಗಳಿಸಿಕೊಳ್ಳಲಾರದ ... ಇಲ್ಲ ಪ್ರೀತಿ, ನಂಬಿ... ದೆ ಹೋದ ಇವರು ಅದಕ್ಕೆ ಬೇಸರವಿಲ್ಲದಿದ್ದರೂ "ನನ್ನ ಸ್ಥಾನಕ್ಕೆ ಏನೋ ಗೌರವ ಬಂದ ಹಾಗಾಯಿತು ?" ಅಂತ ಹಾರಾಡುತ್ತಿದ್ದವರು. ಇಂಥವರು, ತಮಗಷ್ಟೇ ಅಲ್ಲ, ತಮ್ಮ ಇಡೀ ಪಡೆಗೇ ತಲೆ ಎತ್ತಲಾರದಂಥ ಅಗೌರವ ತಂದು ಕೊಟ್ಟಿದ್ದಾರೆ.

ಮೊನ್ನೆಮೊನ್ನೆ ಇವರ ಮೇಲೆ ಠಾಣೆಯಲ್ಲೇ ಕೆಲವರು ಹಲ್ಲೆ ನಡೆಸಿದರೆಂಬ ಸುದ್ದಿಯ ಬಗ್ಗೆ ಹೇಳುತ್ತಿದ್ದೇನೆ. ತಮಗಿರುವ ಅಧಿಕಾರದಲ್ಲಿ ತಾವು ಏನು ಬೇಕಾದರೂ ಮಾಡಬಹುದು ಎಂಬ 'ತರ್ತು ಪರಿಸ್ಥಿತಿ ನೀತಿ'ಯನ್ನು ಹೊಂದಿದಂತಿದ್ದ ಇವರು. ಯಾರೋ ರಸ್ತೆಯ ಪಕ್ಕದಲ್ಲಿ ನಿಲ್ಲಿಸಿದ್ದ ಮೋಟರ್ ಸೈಕಲನ್ನು 'ಬಂಧಿಸಿದ್ದು', ನಯವಾಗಿಯೇ ಕೇಳಿದರೂ ಹಿಂದಕ್ಕೆ ಕೊಡದೆ, ರಸೀದಿ ಕೇಳಿದ್ದಕ್ಕೇ ಹೊಡೆದದ್ದು ಎಲ್ಲ ತೀರ ತಪ್ಪು, ನಿಜ. ಆದರೆ ಅದಕ್ಕೆ ಪ್ರತಿಯಾಗಿ ಪ್ರಭಾವಿಗಳ ಗುಂಪು ಅವರು ಸಮವಸ್ತ್ರದಲ್ಲಿದ್ದಾಗ ಠಾಣೆಯಲ್ಲೇ ಅವರ ಮೇಲೆ ಹಲ್ಲೆ ಮಾಡಿದ್ದು ಮಾತ್ರ ಎಲ್ಲರೂ ಯೋಚಿಸಬೇಕಾದ ಸಂಗತಿ. (ಪೋಲೀಸ್ ವರಿಷ್ಠರು ಅಂಥ ಪ್ರಕರಣ ನಡೆದೇ ಇಲ್ಲ ಎನ್ನುತ್ತಾರೆ. ಆದರೆ ಅದು ನಡೆದುದಕ್ಕೆ ಹತ್ತಾರು ಪ್ರತ್ಯಕ್ಷ ದರ್ಶಿಗಳಿದ್ದಾರೆ.)

### ಸಂಘ ಸೂಚನೆಯಲ್ಲ

ಆದರೆ ಅಲ್ಲಿ ನಡೆದರೂ ಕಾನೂನು ಕ್ರಮ ತೆಗೆದುಕೊಳ್ಳಲಾರದೆ 'ರಾಜಿ' ಅಂತ ಮಾಡಿಕೊಂಡ ಪೋಲೀಸ್ ವ್ಯವಸ್ಥೆಯ ದುರವಸ್ಥೆ ಅದೇ ತಂದುಕೊಂಡದ್ದು. ನ್ಯಾಯ-ಕಾನೂನುಗಳ ಮುಂದೆ ಎಲ್ಲರನ್ನು ಸಮನಾಗಿ ಕಾಣದೆ ರಾಜಕೀಯ ಅಧಿಕಾರಸ್ಥರ ಸೇವೆಗೆ ಮುಡಿಪಾಗಿ ಹೋಗಿರುವುದು ಈ ದುಃಸ್ಥಿತಿಗೆ ಕಾರಣ. ಇದರಿಂದ ಎದ್ದು ಕಾಣುವ ಇನ್ನೊಂದು ಅಂಶವೆಂದರೆ ಅಧಿಕಾರಿಗಳ ಕೊಬ್ಬಿನ ವರ್ತನೆ ಮತ್ತು ರಾಜಕೀಯಸ್ಥರ ನಿರಂಕುಶತೆ.

... ಕಾರಣಕ್ಕಾಗಲಿ, ... ಹಲ್ಲೆ ... ವರು ಪೋಲೀಸ್ ಅಧಿಕಾ... ಮಾಡಿ ಕಾನೂನು ಕ್ರಮ ತಪ್ಪಿಸಿಕೊಳ್ಳಬಹುದಾದರೆ ೧) ಸಮಾಜದಲ್ಲಿ ಅಂಥವರನ್ನು ತಡೆಯುವವರು ಯಾರು ; ೨) ಅಂಥವರಿಂದ ಪೋಲೀಸರಿಗೆ ರಕ್ಷಣೆಯೇನು — ಎಂಬೆರಡು ಪ್ರಶ್ನೆಗಳು ಸಮಾಜದ ಮತ್ತು ಪೋಲೀಸ್ ಪಡೆಯ ಮೇಲೆ ಮಾಡಬಹುದಾದ ನೈತಿಕ ಪರಿಣಾಮ ಎಂಥದು ? ಈಗಾಗಲೇ ಅಂತಃಸತ್ವವನ್ನು ಕಳೆದುಕೊಂಡು, ಉಳ್ಳವರು ಆಡಿಸಿದಂತೆ ಆಡುವ ಬೆದರು ಬೊಂಬೆ ಮಾತ್ರ ಆಗಿ ಉಳಿದಿರುವ ಈ ಪಡೆ ತನ್ನ ಅರ್ಥವನ್ನು ಏನಾದರೂ ಉಳಿಸಿ ಕೊಳ್ಳಬಲ್ಲದೆ ?

ಪೋಲೀಸ್ ವ್ಯವಸ್ಥೆ ಎಷ್ಟೇ ಕುಲಗೆಟ್ಟಿದ್ದರೂ ಅದರೊಳಗೆ ಎಷ್ಟೋ ಜನ ಒಳ್ಳೆ ಮ ಕೆಲಸ ಮಾಡಬಲ್ಲ ತರುಣರು ಸೇರುತ್ತಿದ್ದಾರೆ. ಆದರೆ, ಒಬ್ಬ ಅಧಿಕಾರಿಯ ಮೇಲೆಯೇ ಹಲ್ಲೆ ನಡೆದದ್ದು, ಡಿಎಸ್‌ಪಿ, ಎಸ್‌ಪಿಗಳೇ ತನಿಖೆಗೆ ಬಂದರೂ 'ಏನೂ ಇಲ್ಲ'ವಾದದ್ದು ನೋಡಿ, "ಇನ್ನು ಸಾಧಾರಣ ಪೇದೆಗೆ ಯಾವ ರಕ್ಷಣೆಯಿದ್ದೀತು" ಎಂಬ ಅಸಹಾಯಕತೆಯ ಚಿತ್ರ ಆ ತರುಣರಿಗೆ ಕೆಲಸ ಮಾಡಲು ಏನು ಸ್ಥೈರ್ಯ ಕೊಟ್ಟೀತು ? ಈ ಕ್ಷೇತ್ರದ ನಾಲ್ಕೈದು ಸ್ಟೇಷನ್‌ಗಳ ಪೋಲೀಸ್ ಹುಡುಗರು ಅವಮಾನದಿಂದ ಕುಗ್ಗಿ ಹೋಗಿರುವುದು ನೋಡಿದರೆ ಹಿರಿಯ ಅಧಿಕಾರಿಗಳು ತಮ್ಮ ಕರ್ತವ್ಯ ನಿಭಾಯಿಸಲಿಲ್ಲ ಎಂದೇ ಅನ್ನಿಸುತ್ತದೆ.

**—ಸಂಪಾದಕ.**

"ಚುನಾವಣೆ ಹತ್ತಿರ ಬರುತ್ತಿರುವುದರಿಂದ ನಿಮ್ಮ ಕ್ಷೇತ್ರಕ್ಕೆ ನಿಮಗೆ ಬೇಕಾದ ಪೋಲೀಸ್ ಅಧಿಕಾರಿಗಳನ್ನು ಈಗಲೇ ಕೇಳಿ ಹಾಕಿಸಿ ಕೊಳ್ಳಿ ಅಂತ ಗುಂಡೂರಾಯರು ತಮ್ಮ ಸೌರ ಮಂಡಲದ ಗ್ರಹಗಳಿಗೂ, ಹತ್ತಿರದ ಉಪ ಗ್ರಹಗಳಿಗೂ ಪರವಾನಗಿ ಕೊಟ್ಟು ಬಿಟ್ಟಿದ್ದಾರಂತಲ್ಲಪ್ಪ?"

"ಏ, ಬಿಡಿ ಸಾರ್, ಯಾರೋ ವಿರೋಧ ಪಕ್ಷದವರು ಹಬ್ಬಿಸಿದ ಸುದ್ದಿಯಿರಬೇಕು".

"ಅಲ್ಲಪ್ಪಾ, ಸರ್ಕಾರದ ಅಂತರಂಗದಿಂದಲೇ ತಿಳಿದು ಬಂದದ್ದು ಇದು— ನಮ್ಮ ಸ್ವಂತ ಗ್ರಹಣ ಸಾಧನದ (ರಿಸೀವಿಂಗ್ ಸೆಟ್ ) ಮೂಲಕ ನಾವು ಗ್ರಹಿಸಿದ ಸಂಕೇತ ಭಾಷೆಯ ಸಂದೇಶ ಇದು."

"ಏನೋ ಸಾರ್. ನನಗಂತೂ ಇದು ವಿರೋಧ ಪಕ್ಷದವರ ಕೈವಾಡವೇ ಅಂತ. ಈ ... ಆದರೂ, ಒಂದು ವೇಳೆ ನಿಜವಿದ್ದರೆ, ಸದ್ಯವೇ ಇಲ್ಲೆಲ್ಲ ಒಂದ್ಸಲ ಅದಲು ಬದಲು ಆಗಬಹುದಲ್ಲಪ ಸಾರ್? ಆಗ ನಮ್ಮ 'ಟಿವಿ' ... ನವರಿಗೆ ಎಲ್ಲಾಗಬಹುದು ಅಂತೀರಾ?"

"ಅದೆಲ್ಲ ಹೇಳಲಿಕ್ಕೆ ನಾನೇನು ರಾಜಕೀಯ ಜ್ಯೋತಿಷಿಯೆ? ಆದರೂ—ನಾವುದಾದರೂ ಪೋಲೀಸ್ ಟ್ರೈನಿಂಗ್ ಕಾಲೇಜಿ...

## ಹರಟೆ ಕಟ್ಟೆ

ಗೋ ಎಸ್ಪಿ ಆಫೀಸಿನ ಮೂಲೆಯೊಂದರ ಮೇಜಿನ ಹಿಂಬದಿಯ ಕುರ್ಚಿಗೋ ಆಗಬಹುದು ಅಂತೀರಾ?"

"ಏನೋ ಸಾರ್...."

"ಅದಿರಲಿ, ಮೊನ್ನೆ ಒಂದ್ನಾಲ್ಕು ಜನ ಹೋಟೆಲಲ್ಲಿ ತಾಜಾ ಸಿಹಿ ತಿಂಡಿ ತಿನ್ತಾ ಮಾತಾಡ್ತಿದ್ರು ಕೇಳಿದ್ರಾ?"

"ಇಲ್ವಲ್ಲ ಸಾರ್, ಏನಂತೆ?"

"ಅದೇ. ಕೈ ಎತ್ತದೆ, ಬೆತ್ತ ಎತ್ತದೆ, ಮೈ ಕೈ ಎಲ್ಲ ಜೋಮು ಹಿಡಿದಿತ್ತಂತೆ. ಸಿಕ್ಕಿದ್ದೇ ಚಾನ್ಸ್ ಅಂತ ಕೈ ಕಾಸಿಕೊಂಡರೆ ತಿರುಗಿ ಮೈಮೇಲೇ ಬಂದರಂತೆ. ಸಂತೋಷದಿಂದ "ಚಾರ್ಜ್" ಎಂದರಂತೆ. ಪಿ.ಸಿ.ಗಳು ಸುಮ್ನೆ ನೋಡ್ತಾ ಇದ್ದರಂತೆ. ಇನ್ನೂ ಜರ್ಬಿನಿಂದ" ಛಾರ್ಜ್" ಅಂದರಂತೆ. ಪಿಸಿಗಳು ಜಾಗಖಾಲಿ ಮಾಡಿದರಂತೆ...."

"ಹ ಹ್ಹ ಹ್ಹ ಹ್ಹಾ ..."

**—ಹರಟೆಮಲ್ಲ.**

ಈಗೊಂದು ವಾರದಿಂದ ಈ ಕ್ಷೇತ್ರದ ಚುನಾವಣಾ ಗಾಳಿಯಲ್ಲಿ ಒಂಥರ ವಿಚಿತ್ರದ ಸುಳಿಯೊಂದು ಸೇರಿಕೊಂಡಂತೆ ಕಾಣುತ್ತಿದೆ—ಪತ್ರಿಕೆ ವರದಿಗಳನ್ನು ನೋಡಿದರೆ.

'ಹೊಸದಿಗಂತ' ದ 'ಜಂಬುಕ' ಕಬ್ಬಿನ ಗದ್ದೆಗಳಿಗೆ ಯಾವಾಗ 'ಜುಯ್ಲಿಗೆ' ಇಳಿಯಬಹುದು; ಇನ್ನೂ ತಿಂಗಳೊಪ್ಪತ್ತು ಕಾಯಬೇಕಾದರೆ ಜಂಬುಕಿಗೂ ಮಕ್ಕಳಿಗೂ ಏನು ತಂದು ಹಾಕುವುದು .... ಅಂತ ಭಾರವಾದ ತಲೆ ಕೆಳಗೆ ಹಾಕಿ ಸರ್ಕೀಟು ಹಾಕುತ್ತಿದ್ದವನಿಗೆ ಯಾರು ಹೇಳಿದರೋ ಏನೋ—ಗುಂಡೂರಾಯರು ಶೃಂಗೇರಿ ಕ್ಷೇತ್ರದಿಂದ ನಿಲ್ಲುತ್ತಾರಂತೆ—ಮಂತ್ರಿ ಬೇಗಾನೆ ರಾಮಯ್ಯನವರಿಗೆ ಬೇಕೇಬೇಕಾದರೆ ತೀರ್ಥಹಳ್ಳಿ ಕೊಡುತ್ತಾರಂತೆ ಅಂತ. ಪಾಪ, ಅವನಿಗೆ ಬೇಗಾನೆಯವರ ಬಗ್ಗೆ ಒಂದು ರೀತಿ ದುಃಖವೇ ಉಕ್ಕಿ ಬಂದುಬಿಟ್ಟಿತು. ಜಂಬುಕಿ, ಮಕ್ಕಳು, ಕಬ್ಬಿನಗದ್ದೆ ಎಲ್ಲ ಒಂದು ಕ್ಷಣ ಮರೆತು ಬಿಟ್ಟವು....—

'ಶೃಂಕೊನ' ಇನ್ನೂ ನಾಲ್ಕು ಹೆಜ್ಜೆ ಮುಂದೆ. ಗುಂಡೂರಾಯರ ಫೋಟೋ ಜೊತೆಗೆ ಹಾಕಿದ ಸುದ್ದಿಗೆ ಹೊಸತೊಂದು ಎಳೆ : ಹಾಗೇನಾದರೂ ಕ್ಷೇತ್ರದಲ್ಲಿ ಒಕ್ಕಲಿಗರಿಗೆ ಪ್ರಾತಿನಿಧ್ಯ ದೊರೆಯದಿದ್ದರೆ ಕೊಪ್ಪದ ಬಿಜಿ ಚಿದಂಬರ್ ಬಂಡುಕೋರ ಅಭ್ಯರ್ಥಿಯಂತೆ! 'ತುಂಗಾವಾರ್ತೆ'ಗೆ ತಮ್ಮ ದಿವಾಕರರ ಗತಿಯೇನಪ್ಪಾ ಅಂತ ದಿಗಿಲು !

ಇದೆಲ್ಲ ಏನು ನಿಜವೆ? ಸುಳ್ಳೆ? ಯಾರಿಗೂ ಗೊತ್ತಿಲ್ಲ. ಎಲ್ಲರಿಗೂ ಒಂಥರ ವಿಸ್ಮಯ.

(ಊನೇ ಪುಟ್ಟಿ)

ಎಲೆಕ್ಷನ್ ಪ್ರಚಾರವಾಗಿ ನಡೆಯುವ ಸಭೆಗಳಲ್ಲಿ ಅಧಿಕಾರ ಸೂತ್ರವೆಲ್ಲ ಶ್ರೀಮಂತರ ಅಧೀನವಾಗುತ್ತದೆ. ಶ್ರೀಮಂತರು ತಮಗೆ ಬೇಕಾದ ರೀತಿಯಲ್ಲಿ ಎಲೆಕ್ಷನ್ ವ್ಯೂಹವನ್ನು ಹೆಣೆಯಿಸಿಕೊಂಡಿದ್ದಾರೆ.

—ಇನ್ನೈಟಿಬೆರೋ ಶಿರೋಮಣಿ

## ಹರಟೆ

(೧ನೇ ಪುಟದಿಂದ)

"ಅಲ್ಲ, ಏನೂ ಇಲ್ಲದೆ ಪತ್ರಿಕೆಯವರು ಸುಮ್ನೆ ಬರೆಯಲಿಕ್ಕಿಲ್ಲ, ಏನೋ ಇರಬೇಕು"

"ಎಂತದ್ರಿ? ಗುಂಡೂಗೆ ಅವನ ಕ್ಷೇತ್ರ ಏನಾಗಿದೆಯಂತೆ ಇಲ್ಲಿಗೆ ಬರ್ಲಿಕ್ಕೆ? ಅಲ್ಲದೆ ತನ್ನ ಕ್ಷೇತ್ರ ಎದುರಿಸಲಾರದೆ ಓಡಿದ ಅಂತ ಅವಮಾನ ಬೇರೆ ಅಲ್ಲವೇನ್ರಿ?...."

"ಎಲ್ಲ ಸುಳ್ಳಿರಬೇಕ್ರಿ. ಚುನಾವಣೆ ಇಷ್ಟು ಹತ್ತಿರ ಬಂದ್ರೂ ಯಾರೂ ಅದರ ಕಡೆ ಮೂಸಿಯೂ ನೋಡುವ ಸೂಚನೆ ಕಾಣುತ್ತಿಲ್ಲ. ಅದೇ ನಾಟಕ ನೋಡಿ ನೋಡಿ ಜನರಿಗೂ ಸಾಕಾಗಿದೆ. ಏನಾದರೂ ಮಾಡಿ ಒಂಚೂರು ಆಸಕ್ತಿ ಹುಟ್ಟಿಸಬೇಕಲ್ಲಾಂತ ಒಂದು ಹೊಸ ದೃಶ್ಯ ಸೇರಿಸಿದ್ದಾರೆ, ಅಷ್ಟೆ"

ಹೌದೇನೋ ಅಂದು ಕೊಳ್ಳುವಷ್ಟರಲ್ಲಿ ಬಿಜಿ ಚಿದಂಬರ್ ಅರ್ಧ ತಲೆ ತಗ್ಗಿಸಿ ಕೊಂಡೇ ಎದುರಾದರು. "ಏನು, ಬಂಡುಕೋರ ಅಭ್ಯರ್ಥಿಗಳು ...." ಅಂದರೆ-"ಈ ಪತ್ರಿಕೆಯವರೂ ಸುಮ್ಮನಿರೊಲ್ಲ. ಏನೋ ಒಂಚೂರು ಕೇಳಿದರೆ ಅದನ್ನೇ ಇಷ್ಟುದ್ದ ಬರೆದು ಬಿಡ್ತಾರೆ...."

ಅಂದರೆ? ಇದ್ದ 'ಅಷ್ಟ'ರಲ್ಲಿ ಏನೋ 'ಇಷ್ಟು' ಹೇಳಿದ್ದರು ಅಂತ ಅರ್ಥವೆ? ಅಂದರೆ? ಏನಾದರೂ....

"ಏನೋಪ್ಪ, ಯಾರಿಗೆ ಗೊತ್ತು ಈ ವಿವಿಧ ವಿನೋದ ವೇಷಧಾರಿಗಳ ವೇಷಾವಳಿ?" ‡‡

## ಕೊಪ್ಪ ಪುರಸಭೆಯಲ್ಲಿ ೧೫ ಮನೆ ಮಂಜೂರು

ಕೊಪ್ಪ: ಆರ್ಥಿಕವಾಗಿ ಹಿಂದುಳಿದವರಿಗಾಗಿ ೧೫ ಮನೆಗಳನ್ನು ಕಟ್ಟಿಸಲು ಪುರಸಭೆಗೆ ತಲಾ ೪ ಸಾವಿರ ರೂ. ಮಂಜೂರಾಗಿದೆ. ಇದರಲ್ಲಿ ೧,೫೦೦ ರೂ. ಸಹಾಯ ಧನವಾಗಿರುತ್ತದೆ.

ತಲಾ ೨,೫೦೦ರೂ. ವೆಚ್ಚದಲ್ಲಿ ಆರ್ಥಿಕವಾಗಿ ಹಿಂದುಳಿದವರ ಮನೆ ರಿಪೇರಿಗಾಗಿ ೫ ಮನೆಗಳಿಗೆ ಮಂಜೂರಾತಿ ದೊರಕಿದೆ. ಇದರಲ್ಲಿ ೧,೫೦೦ ರೂ. ಸಹಾಯ ಧನವಾಗಿರುತ್ತದೆ.

### ಶೌಚಗೃಹಕ್ಕೆ

ಪ್ರೌಢಶಾಲೆಯಲ್ಲಿ ವಿದ್ಯಾರ್ಥಿನಿಯರಿಗಾಗಿ ೧೨ ಸಾವಿರ ರೂ. ವೆಚ್ಚದಲ್ಲಿ ಶೌಚಗೃಹ ಕಟ್ಟಲು ಮಂಜೂರಾತಿ ದೊರೆತಿದೆ.

## ನಾರ್ವೆ-ಹರಿಹರಪುರ ರಸ್ತೆ ದುರಸ್ತಿಗೆ ಮನವಿ

ಹರಿಹರಪುರ: ಇಲ್ಲಿಂದ ನಾಗಲಾಪುರದ ಮೂಲಕ ನಾರ್ವೆಗೆ ಹೋಗುವ ರಸ್ತೆಯಲ್ಲಿ ಹಿಂದೆ ಬಸ್ ಸಹ ಸಂಚರಿಸುತ್ತಿದ್ದು ಹತ್ತಾರು ಹಳ್ಳಿಗಳವರಿಗೆ ಅನುಕೂಲವಾಗಿತ್ತು. ಈಗ ರಸ್ತೆಯೆಲ್ಲ ರಿಪೇರಿಯಿಲ್ಲದೆ ಹಾಳು ಬಿದ್ದಿದೆ. ಕೇವಲ ಗಾಡಿ ಸಂಚಾರಕ್ಕೇ ಕಷ್ಟವಾಗಿದೆ. ಲೋಕೋಪಯೋಗಿ ಇಲಾಖೆ ಇದನ್ನು ದುರಸ್ತು ಮಾಡಿ ಬಸ್ ಸಂಚಾರಕ್ಕೆ ಯೋಗ್ಯವಾಗುವಂತೆ ಮಾಡಲಿ ಎಂದು ಸುತ್ತಮುತ್ತಲ ಗ್ರಾಮದವರು ಆಶಿಸಿದ್ದಾರೆ.

## ನುಂಗಲು ಬಾಯಿ ತೆರೆದು ನಿಂತ ಬಾವಿ !

ಕೆಸವೆ: ಈ ಗ್ರಾಮದ ಬಾಳಮಟ್ಟದಲ್ಲಿ ೩ ವರ್ಷದ ಹಿಂದೆ ತಾ. ಅ. ಮಂ ಬಾವಿ ತೋಡಿಸಿತು. ನೀರೂ ಬಂತು. ಆದರೆ ಕಟ್ಟಿ ಒಂದು ೧೦-೧೨ ಅಡಿ ಆಗುವಷ್ಟರಲ್ಲಿ ಮಳೆಗಾಲ ಶುರುವಾಗಿ ಕಟ್ಟ ನಿಂತಿತು. ಮಳೆಯ ಜೋರಿಗೆ ಮಣ್ಣು ಕುಸಿದು ಬಾವಿ ಸ್ವಲ್ಪ ಭಾಗ ತೆಂಗಿತು.

ಪುನಃ ಕಟ್ಟ ಇದ್ದಲ್ಲಿವರೆಗೆ ಮಾತ್ರ ಮಣ್ಣು ತೆಗೆದು, ಅದೇ ಕಟ್ಟವನ್ನು ಪೂರ್ತಿ ಕಟ್ಟಿ, ಬಿಲ್‌ಪಾಸಾಯಿತು. ಆದರೆ ೧೦-೧೨ ಅಡಿ ಮಣ್ಣು ತೆಂಗಿದ್ದರಿಂದ ನೀರು ಬರಲಿಲ್ಲ.

ಈಗ ಕೈಪಿಡಿಯಿಲ್ಲದ ಈ ನೆಲಮಟ್ಟದ ಬಾವಿ ಅಕ್ಕಪಕ್ಕದ ಕೂಲಿ ಕಾರ್ಮಿಕರ ಮನೆಗಳಿಗೆ ಮೃತ್ಯುದರ್ಶನ ಮಾಡಿಸುತ್ತ, ಮಕ್ಕಳು-ಜಾನುವಾರುಗಳನ್ನು ಕಬಳಿಸಲು ಬಾಯಿ ತೆರೆದು ನಿಂತಂತಿದೆ. ಬೇಲಿ ಹಾಕಿದರೆ ಜನ-ಜಾನುವಾರು ಅದನ್ನು ಉಳಿಸುವುದಿಲ್ಲ.

ಇಲ್ಲಿ ೨೧ ಜನತಾ ನಿವೇಶನಗಳು ಮಂಜೂರಾಗಿವೆ. ಈ ಬಾವಿಯನ್ನು ರಿಪೇರಿ ಮಾಡಿಸಲು ಅವಕಾಶವಿಲ್ಲದಿರುವುದರಿಂದ ಅದನ್ನು ತೆಂಗಿಸಿ, ಎಲ್ಲಾ ಮನೆ-ನಿವೇಶನಗಳಿಗೆ ಮಧ್ಯೆ ಬರುವಂತೆ ಹೊಸ ಬಾವಿಯನ್ನಾದರೂ ತೋಡಿಸಲಿ ಎಂದು ಇಲ್ಲಿನ ಮನೆಗಳವರು ಆಶಿಸಿದ್ದಾರೆ.

## ನ.ರಾ.ಪುರ ಜೈಲಿನಿಂದ ಬಂದಿಗಳ ಪರಾರಿ

(೧ನೇ ಪುಟದಿಂದ)

ಆ ಅರ ಮಧ್ಯ ರಾತ್ರಿಯ ನಂತರ ನ್ಯಾಯಾಲಯದೆದುರು ನಿಲ್ಲಿಸಲಾಗಿದ್ದ ಗಂಧ ಸಾಗಣೆ ಪ್ರಕರಣದ ಕಾರೊಂದನ್ನು ಬೆಂಕಿ ಹಚ್ಚಿ ಸುಡುವ ಯತ್ನ ನಡೆದಿದ್ದು, ಪರಾರಿಯಾಗಿರುವ ನಜೀರ್ ಮತ್ತು ಅವನ ಜೊತೆಯವರ ಕೈವಾಡವಿದೆಂದು ಶಂಕಿಸಲಾಗಿದೆ.

ಈ ಸಂಬಂಧ ಇಲ್ಲಿನ ನ್ಯಾಯಾಲಯದಲ್ಲಿ ಮೊಕದ್ದಮೆಯೊಂದನ್ನು ದಾಖಲು ಮಾಡಿರುವ ನ. ರಾ. ಪುರ ಪೋಲೀಸರು, ಪರಾರಿಯಾದವರ ಪತ್ತೆಯ ಕೆಲಸವನ್ನು ಒಂದು ಸವಾಲಾಗಿ ಸ್ವೀಕರಿಸಿದ್ದಾರೆನ್ನಲಾಗಿದೆ.

ಜಿಲ್ಲೆಯಲ್ಲೇ ಅತ್ಯಂತ ದಕ್ಷರೆಂದು ಅಧಿಕಾರಿಗಳ ಮೆಚ್ಚಿಗೆಗೆ ಪಾತ್ರರಾಗಿರುವ ಠಾಣಾಧಿಕಾರಿ ಆರ್. ಲಕ್ಷ್ಮೀಶ್ವರ ನೇತೃತ್ವದಲ್ಲಿ ನ.ರಾ.ಪುರ ಪೋಲೀಸರ ಈ "ಪ್ರತಿ ಸಾಹಸ" ಯಶಸ್ವಿಯಾಗಲೆಂದು ಆಶಿಸಲಾಗಿದೆ. ಅವರ ಪ್ರಯತ್ನದಲ್ಲಿ ಹಿರಿಯ ಅಧಿಕಾರಿಗಳಿಂದ ಮನಃಪೂರ್ವಕವಾಗಿ ಎಲ್ಲ ಸೌಕರ್ಯಗಳೂ ದೊರೆಯುವುದು ಅಗತ್ಯ.

## ಐವರು ಸ್ಟೈಪೆಂಡರಿಗಳ ವಜಾ

ನ.ರಾ.ಪುರ: ಸರ್ಕಾರದ ಸ್ಟೈಪೆಂಡಿಯರಿ ಯೋಜನೆಯಲ್ಲಿ ಕೆಲಸ ಮಾಡುತ್ತಿದ್ದ ಐವರನ್ನು ಕೆಲಸದಿಂದ ತೆಗೆದು ಹಾಕಿ ಅ೨೧ರಂದು ಜಿಲ್ಲಾಧಿಕಾರಿಗಳು ಆಜ್ಞೆ ಹೊರಡಿಸಿದ್ದಾರೆ. ಆದಾಯ ಹೆಚ್ಚಿಗೆ ಇದ್ದುದು ಮತ್ತು ಒಂದೇ ಮನೆಯಲ್ಲಿ ಇಬ್ಬರು ಸ್ಟೈಪೆಂಡರಿಗಳಿದ್ದುದು ವಜಾಕ್ಕೆ ಕಾರಣವಾಗಿದೆ.

## ನಾಗರೀಕ ಯುಗದಿಂದ ಬಹಳ ಹಿಂದಿರುವ ಹೆಬ್ಬೆ ಗ್ರಾಮ

ನ. ರಾ. ಪುರ: ಹೆಬ್ಬೆ ಎಂಬ ಹೆಸರು ಜಿಲ್ಲೆಯ ರಾಜಕಾರಣಿಗಳಿಗೆ ಈಗ ಸಾಕಷ್ಟು ಪರಿಚಿತ. ನಾಗರೀಕ ಸೌಲಭ್ಯಗಳಿಂದ ಇನ್ನೂ ಬಹಳ ದೂರ ಇರುವ ಈ ಗ್ರಾಮ ಮಧ್ಯಯುಗದ ನೂರರಿಪ್ಪತ್ತಾರು ಹಳ್ಳಿಗಳ ಮಧ್ಯೆ ಇದೆ.

ನಾಗಲಾಪುರ, ವರ್ಕಾಟೆ, ಪಂತ್ವಾನಿ, ಕೂಸಕಲ್ಲು, ಹೆಬ್ಬೆ, ದಂಡುಬಿಟ್ಟಾಳ, ನಂದಿಗಾವೆ, ಕುರುಕುಲಮನೆ, ಒಡ್ಡಿಹಟ್ಟಿ, ಮಾವಿನ್ಲ, ದಬ್ಬಗಾರ್, ಬಿಳ್ಲ, ಕೆಸವೆ, ಮುತ್ತೋಡಿ, ಸಾಸ್ವೆ-ಮುಂತಾದ ಗ್ರಾಮಗಳು ಭದ್ರಾ ಹಿನ್ನೀರಿನ ಒಂದೆ ದಾರಿ ತಪ್ಪಿ ಕೂತ ಹಳ್ಳಿಗಳಂತಿವೆ.

ಕನಿಷ್ಠ ರಸ್ತೆ ಸೌಕರ್ಯವಿಲ್ಲ. ಯಾರಿಗಾದರೂ ಕಾಯಿಲೆಯಾದರೆ ನ. ರಾ. ಪುರಕ್ಕೆ ಒರಬೇಕು-ಆದೂ ಕಂಬಳಿಯ ಜೋಳಿಗೆಯಲ್ಲಿ ಹೊತ್ತು ತರಬೇಕು-ಸುತ್ತಿ ಬಳಸಿಕೊಂಡು.

ಬಹಳ ಹಿಂದುಳಿದ ಗ್ರಾಮವಾದರೂ ಒಂದೇ ಒಂದು ನೀರಾವರಿ ಕೆಲಸ ಆಗಿಲ್ಲ. ಬೇಡಿಕೆ ಹತ್ತಿಪ್ಪತ್ತು ವರ್ಷಗಳಿಂದಲೂ ಇದೆ. ೧೦-೧೨ ಸಾವಿರ ಜನಕ್ಕೆ ತೊಂದರೆಯಾಗಿದೆ. ಈಚೆಗೆ ಯೋಜನೆಗಳೂ ಕೇಳಿ ಬರುತ್ತಿವೆ. ಆದರೆ ಕೆಲಸ ಆಗುವುದು ಯಾವಾಗಲೋ ಎಂಬ ನಿರಾಶೆಯೇ ಇಲ್ಲಿನವರ ಮನಸ್ಸಿನಲ್ಲಿ.

'ನಾವು ಅನಾಗರೀಕರು ಸ್ವಾಮಿ' ಎಂದು ವಿಷಾದ-ವ್ಯಂಗ್ಯ ಬೆರೆಸಿ ಹೇಳುವ ನಾಗಲಾಪುರ ಪಂಚಾಯ್ತಿ ಸದಸ್ಯ ಶೇಷಣ್ಣ ಗೌಡರಂಥ ಯುವಕರು, ಇಲ್ಲಿನ ಕೊರತೆ, ಸಮಸ್ಯೆಗಳನ್ನು ಬಿಚ್ಚಿಡಲು ಜಿಲ್ಲಾ ವಾರ್ತಾ ಇಲಾಖೆಯವರನ್ನೇ ಕರೆದೊಯ್ಯುವ ಹವಣಿಕೆಯಲ್ಲಿದ್ದಾರೆ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು : ದೀಪಟಿಗೆ ಅಚ್ಚುಕೂಟ, ಕೊಪ್ಪ.

## ಕಾನೂರು ಹರಿಜನರು

(೧ನೇ ಪುಟದಿಂದ)

ಇ ಜನರಲ್ಲಿ ಹಲವು ... ಕಟ್ಟಿ ಇವರ ಭೂಮಿಗೆ ನೀರು ... ಭರವಸೆ ಕೊಟ್ಟು ಇವರು ಇಲ್ಲಿಗೆ ಬಂದು ... ವರ್ಷ ಆಗಿದೆ. ಆ ... ಕಟ್ಟೆಯ ನೀರಿಕ್ಷೆ ... ಲ್ಲೇ ಹತ್ತಾರು ಜನ ಲೋಕವನ್ನು ಬಿಟ್ಟು ... ಗಿದೆ! ಆದರೂ ಆಣೆಕಟ್ಟುಮಾತ್ರ ಇನ್ನೂ ... ಈ ಲೋಕದ ಬೆಳಕು ಕಂಡಿಲ್ಲ.

ಈ ವಿಷಯವನ್ನು 'ಮುಂಜಾವು' ... ತಿಳಿಸಿದ ನ.ರಾ.ಪುರ ತಾ॥ ಕಾಂಗ್ರೆಸ್ ಅಧ್ಯಕ್ಷ ಅಬ್ಬಾಸ್ ಸಮುದ್ರರವರು ಈ ಬಡ ಹರಿಜನ... ರಿಗೆ ಕೊಟ್ಟ ಭರವಸೆ ಬೇಗನೇ ಈಡೇರಲೆಂದು ಆಶಿಸಿದ್ದಾರೆ.

## ಚುನಾವಣೆ ಬಹಿಷ್ಕರಿಸಲು ತೋಟಕಾರ್ಮಿಕರ ನಿರ್ಧಾರ

ಜಯಪುರ: ತೋಟಕಾರ್ಮಿಕರಿಗೆ ... ಪರ್ಯಾಸ್ತು ಮಂಜೂರು ಮಾಡಬೇಕೆಂ... ಸರ್ಕಾರದ ನೀತಿ, ಕನಿಷ್ಠ ವೇತನ ... ಯನ್ನು ಕಾನೂನು ಬದ್ಧವಾಗಿ ಮಾಡ... ಇದ್ದುದು ಮುಂತಾದುವನ್ನು ವಿರೋಧಿಸಿ ... ತೋಟ ಕಾರ್ಮಿಕರು ಮುಂಬರುವ ಚುನಾವಣೆಗಳನ್ನು ಬಹಿಷ್ಕರಿಸಲು ನಿರ್ಧರಿಸಿರು... ದಾಗಿ ಇಲ್ಲಿನ ಕರ್ನಾಟಕ ಎಸ್ಟೇಟ್ ಲೇಬರ್ ಯೂನಿಯನ್ನಿನ ಪ್ರಕಟಣೆ ತಿಳಿಸಿದೆ.

ಯೂನಿಯನ್ನಿನ ಕರೆಯ ಮೇರೆಗೆ ಅ. ... ರಂದು ಜಯಪುರ, ಮೂಡಿಗೆರೆ, ಕಳಸ ... ಬಣಕಲ್ ಮತ್ತು ... ಪ್ರದೇಶಗಳ ... ಸುಮಾರು ೧೦ ಸಾವಿರ ಕಾರ್ಮಿಕರು ಒ... ದು ದಿನದ ಸಾಂಕೇತಿಕ ಮುಷ್ಕರ, ಮೆರ... ಣಿಗೆ ನಡೆಸಿದ್ದಾಗಿ ಸಂಘ ತಿಳಿಸಿದೆ.

ಕಾರ್ಮಿಕ ಮಂತ್ರಿ ಎ.ಬಿ.ಜಕನೂ... ರಾಜೀನಾಮೆ ಕೊಡಬೇಕೆಂದು ಒತ್ತಾಯ... ಸಿರುವ ಯೂನಿಯನ್ ನವೆಂಬರ್ ೧೯ರಂದು ಒಂದು ದಿನದ ಮುಷ್ಕರ ನಡೆಸಲು ನಿರ್ಧರಿಸಿದೆ.